

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1079 |
| ಸದಸ್ಯರ ಹೆಸರು | : | ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 22. 12. 2021 |
| ಉತ್ತರಿಸುವ ಸಚಿವರು | : | ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಸಚಿವರು. |

| ಕ್ರ. ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಪ್ರಸ್ತುತ ಸಾಲಿನಲ್ಲಿ ಜಲಸಾರಿಗೆ ಇಲಾಖೆಗೆ ಸಂಬಂಧಿಸಿದಂತೆ, ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಇಲಾಖಾ ಕಾರ್ಯಕ್ರಮಗಳಿಗೆ ಮೀಸಲಿಟ್ಟ ಅನುದಾನವೆಷ್ಟು; ಬಿಡುಗಡೆಯಾದ ಅನುದಾನವೆಷ್ಟು; ಖರ್ಚಾದ ಅನುದಾನವೆಷ್ಟು; ಯಾವ ಯಾವ ಕಾರಣಗಳಿಗೆ ಅನುದಾನ ವಿನಿಯೋಗಿಸಲಾಗಿದೆ. | ಪ್ರಸ್ತುತ ಸಾಲಿನಲ್ಲಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ಸಂಬಂಧಿಸಿದಂತೆ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಇಲಾಖಾ ಕಾರ್ಯಕ್ರಮಗಳಿಗೆ ಮೀಸಲಿಟ್ಟ/ ಬಿಡುಗಡೆಯಾದ/ಖರ್ಚಾದ ಅನುದಾನದ ವಿವರಗಳು ಈ ಕೆಳಗಿನಂತಿವೆ.<br>(ರೂ. ಲಕ್ಷಗಳಲ್ಲಿ)<br>(table below)<br>ಮೇಲಿನ ಅನುದಾನವನ್ನು ವಿನಿಯೋಗಿಸಿದ ಕಾಮಗಾರಿಗಳ ವಿವರಗಳನ್ನು **ಅನುಬಂಧ-1** ರಲ್ಲಿ ನೀಡಿದೆ. |
| (ಆ) | ನೂತನ ಸಚಿವರು ಅಧಿಕಾರ ಸ್ವೀಕರಿಸಿದ ನಂತರ ಎಷ್ಟು ತಾಲ್ಲೂಕುಗಳಿಗೆ ಭೇಟಿ ನೀಡಿದ್ದಾರೆ; ಎಷ್ಟು ಬಂದರುಗಳಿಗೆ ಭೇಟಿ ನೀಡಿದ್ದಾರೆ; ಇಲಾಖಾ ಯೋಜನೆಗಳ ಕುರಿತು | ಮಾನ್ಯ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಅಧಿಕಾರ ಸ್ವೀಕರಿಸಿದ ನಂತರ ದಿನಾಂಕ : 10. 03. 2021 ಮತ್ತು 12. 03. 2021 ರಂದು ಮಂಗಳೂರಿನ ಸೋಮೇಶ್ವರ ಪ್ರದೇಶದಲ್ಲಿ ಉಂಟಾದ ಕಡಲ್ಕೊರೆತ ಹಾಗೂ ಎಡಿಬಿ ವತಿಯಿಂದ ಕೈಗೊಳ್ಳಲಾಗುತ್ತಿರುವ |

| ಕ್ರ. ಸಂ | ಲೆಕ್ಕ ಶೀರ್ಷಿಕೆ | ಮೀಸಲಿಟ್ಟ ಅನುದಾನ | ಬಿಡುಗಡೆಗೊಂಡ ಅನುದಾನ | ಖರ್ಚಾದ ಅನುದಾನ |
|---|---|---|---|---|
| 1. | 5051 ಬಂದರು ಅಭಿವೃದ್ಧಿ | 2060. 00 | 1137. 25 | 1098. 54 |
| 2. | 4711 ಸಮುದ್ರ ಕೊರೆತ ಪ್ರತಿಬಂಧಕ ಕಾಮಗಾರಿಗಳು | 2500. 00 | 1925. 00 | 1925. 00 |

| | | |
|---|---|---|
| | ಎಷ್ಟು ಪ್ರಗತಿ ಪರಿಶೀಲನಾ ಸಭೆಗಳನ್ನು ನಡೆಸಿರುತ್ತಾರೆ; (ದಿನಾಂಕ, ಸ್ಥಳದೊಂದಿಗೆ ಮಾಹಿತಿ ನೀಡುವುದು.) | ಕಾಮಗಾರಿಗಳನ್ನು ಪರಿವೀಕ್ಷಿಸಿರುತ್ತಾರೆ. ದಿನಾಂಕ : 07.06.2021 ರಿಂದ 09.06.2021 ರವರೆಗೆ ರಾಜ್ಯದ ಕರಾವಳಿಯಲ್ಲಿನ 12 ತಾಲ್ಲೂಕುಗಳಿಗೆ ಭೇಟಿ ನೀಡಿರುತ್ತಾರೆ.<br>ಮಾನ್ಯ ಸಚಿವರು ರಾಜ್ಯದ ಕರಾವಳಿಯ ಚಿಕ್ಕ ಬಂದರುಗಳಾದ ಕಾರವಾರ, ಬೇಲೇಕೇರಿ, ತದಡಿ, ಹೊನ್ನಾವರ, ಕುಂದಾಪುರ ಹಾಗೂ ಮಂಗಳೂರು ಹಳೇ ಬಂದರುಗಳಿಗೆ ಭೇಟಿ ನೀಡಿ ಸದರಿ ಬಂದರುಗಳಲ್ಲಿ ಕೈಗೆತ್ತಿಕೊಳ್ಳಲಾದ ಅಭಿವೃದ್ಧಿ ಕಾಮಗಾರಿಗಳನ್ನು ಹಾಗೂ ಸಮುದ್ರ ಕೊರೆತ ತಡೆಗೋಡೆ ನಿರ್ಮಾಣ ಕಾಮಗಾರಿಗಳನ್ನು ಮತ್ತು ಮೀನುಗಾರಿಕಾ ಬಂದರುಗಳಿಗೆ ಭೇಟಿ ನೀಡಿ ಪರಿಶೀಲನೆ ಮಾಡಿರುತ್ತಾರೆ.<br>ದಿನಾಂಕ : 22.06.2021 ರಂದು ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾಧಿಕಾರಿಗಳ ಕಚೇರಿಯಲ್ಲಿ ಪ್ರಗತಿ ಪರಿಶೀಲನಾ ಸಭೆಯನ್ನು ಹಾಗೂ ಸರ್ಕಾರದ ಮಟ್ಟದಲ್ಲಿ ದಿನಾಂಕ : 17.09.2021 ರಂದು ಇಲಾಖೆಯ ಪ್ರಗತಿ ಪರಿಶೀಲನಾ ಸಭೆಯನ್ನು ನಡೆಸಿರುತ್ತಾರೆ.<br>ದಿನಾಂಕ : 26.11.2021 ರಂದು ಬೆಂಗಳೂರಿನ ಇಲಾಖಾ ಸಚಿವರ ಕಚೇರಿಯಲ್ಲಿ ರಾಜ್ಯದ ಕರಾವಳಿ ತೀರದಲ್ಲಿ ಸಂಭವಿಸುತ್ತಿರುವ ಸಮುದ್ರ ಕೊರೆತಕ್ಕೆ Innovative ಮಾದರಿಯ ಪರಿಹಾರ ಕಂಡುಕೊಳ್ಳುವ ಕುರಿತು ಸಭೆಯನ್ನು ನಡೆಸಿರುತ್ತಾರೆ. |
| (ಇ) | ನೂತನ ಸಚಿವರು ತಮ್ಮ ಅಧಿಕಾರಿಯವಧಿಯಲ್ಲಿ ಇಲಾಖೆಯ ಸಮಗ್ರ ಅಭಿವೃದ್ಧಿಗಾಗಿ ಯಾವ ಯಾವ ದೂರದೃಷ್ಟಿ, ಯೋಜನೆ ಹಾಗೂ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುವ ಯೋಜನೆ ಹೊಂದಿದ್ದಾರೆ; ಅವು ಯಾವುವು? | ನೂತನ ಸಚಿವರು ಅಧಿಕಾರ ವಹಿಸಿಕೊಂಡ ನಂತರ ರಾಜ್ಯದ ಕರಾವಳಿಯ ಬಂದರುಗಳ ಸಮಗ್ರ ಅಭಿವೃದ್ಧಿಯನ್ನು ಗಮನದಲ್ಲಿಟ್ಟು, ಕರ್ನಾಟಕ ಜಲಸಾರಿಗೆ ಮಂಡಳಿಗೆ ಸನ್ಮಾನ್ಯ ಮುಖ್ಯ ಮಂತ್ರಿಗಳನ್ನು ಅಧ್ಯಕ್ಷರನ್ನಾಗಿ ಹಾಗೂ ಬಂದರು ಮತ್ತು ಒಳನಾಡು ಇಲಾಖೆಯ ಸಚಿವರನ್ನು ಉಪಾಧ್ಯಕ್ಷರನ್ನಾಗಿ ನೇಮಕ ಮಾಡಲಾಗಿರುತ್ತದೆ.<br>ಕೇಂದ್ರ ಸರ್ಕಾರದ ಬಂದರು, ಹಡಗು ಹಾಗೂ ಜಲಸಾರಿಗೆ ಮಂತ್ರಾಲಯದಿಂದ ದಿನಾಂಕ : 02.03.2021 ರಂದು ಜರುಗಿಸಿದ Virtual Maritime India Summit 2021 ನಲ್ಲಿ ಮಾನ್ಯ ಸಚಿವರು ಭಾಗವಹಿಸಿ, ಕರ್ನಾಟಕ ರಾಜ್ಯದ ಕರಾವಳಿಯ ಸಮಗ್ರ ಅಭಿವೃದ್ಧಿಗಾಗಿ ಬಂಡವಾಳ ಹೂಡುವಂತೆ ದೇಶದ ಹಾಗೂ ವಿದೇಶದ ಆಸಕ್ತ ಬಂಡವಾಳ ಹೂಡಿಕೆದಾರರನ್ನು ಕೋರಿರುತ್ತಾರೆ.<br>ದಿನಾಂಕ : 09.07.2021 ರಂದು ಬೆಂಗಳೂರಿನಲ್ಲಿ ಜರುಗಿದ 5 ನೇ ಕರ್ನಾಟಕ ಜಲಸಾರಿಗೆ ಮಂಡಳಿ ಸಭೆಯು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಜರುಗಿದ್ದು, ಸದರಿ ಸಭೆಯಲ್ಲಿ ರಾಜ್ಯದ ಬಂದರುಗಳ ಅಭಿವೃದ್ಧಿ ಕುರಿತು ಮಾನ್ಯ ಇಲಾಖಾ ಸಚಿವರ ಸೂಚನೆಯಂತೆ, ಬಂದರುಗಳ ಹಾಗೂ ಕರಾವಳಿ ಪ್ರವಾಸೋದ್ಯಮದ ಯೋಜನೆಗಳನ್ನು ಅನುಷ್ಠಾನಗೊಳಿಸುವ ಕುರಿತು ನಿರ್ಣಯಿಸಲಾಗಿರುತ್ತದೆ.<br>ಮಾನ್ಯ ಸಚಿವರು ದಿನಾಂಕ:17.09.2021 ರಂದು ವಿಧಾನಸೌಧ, ಬೆಂಗಳೂರಿನಲ್ಲಿ ಮಾನ್ಯ ಕಾರ್ಮಿಕ ಸಚಿವರು ಹಾಗೂ ಉತ್ತರ |

ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು ಇವರೊಂದಿಗೆ ಉತ್ತರ ಕನ್ನಡ ಜಿಲ್ಲೆಯ ಕರಾವಳಿಯಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು, ಬಂದರು ಅಭಿವೃದ್ಧಿ ಮತ್ತು ಮೀನುಗಾರಿಕಾ ಯೋಜನೆಗಳನ್ನು ಅಭಿವೃದ್ಧಿಪಡಿಸುವ ಕುರಿತು ಸಭೆಯನ್ನು ನಡೆಸಿರುತ್ತಾರೆ.

ದಿನಾಂಕ :05.10.2021 ರಂದು ಮುಂಬೈಯಲ್ಲಿ Karnataka Maritime Prospects & Opportunities - Stake Holders Conference ನ ಮೂಲಕ ರಾಜ್ಯದ ಕರಾವಳಿಯ ಬಂದರುಗಳ ಸಮಗ್ರ ಅಭಿವೃದ್ಧಿಗಾಗಿ ಬಂಡವಾಳ ಹೂಡುವಂತೆ ಆಸಕ್ತರಿಗೆ ಮನವರಿಕೆ ಮಾಡಿರುತ್ತಾರೆ.

ರಾಜ್ಯದ ಕೇಣಿ ಬೇಲೇಕೇರಿಯಲ್ಲಿ ನೂತನ ಬಂದರನ್ನು ಪಿಪಿಪಿ ಮಾದರಿಯ ಸ್ವಿಸ್ ಚಾಲೆಂಜ್ ರೀತಿಯಲ್ಲಿ ಮತ್ತು ಪಾವಿನಕುರ್ವೆ ಬಂದರನ್ನು DBFOT ಮಾದರಿಯಲ್ಲಿ ಅಭಿವೃದ್ಧಿಪಡಿಸಲು ಕ್ರಮ ಜರುಗಿಸಲಾಗಿದೆ.

ಇಲಾಖೆಯ ಸಮಗ್ರ ಅಭಿವೃದ್ಧಿಗಾಗಿ ಪ್ರಸ್ತುತ ಸಾಗರಮಾಲಾ ಯೋಜನೆಯಡಿಯಲ್ಲಿ ರಾಜ್ಯಕ್ಕೆ 4 ಪ್ರಮುಖ ಯೋಜನೆಗಳು ಮಂಜೂರಾಗಿರುತ್ತವೆ. ಇದಲ್ಲದೇ, ರಾಜ್ಯದ ಕರಾವಳಿಯ ಬಂದರುಗಳ ಅಭಿವೃದ್ಧಿ ಹಾಗೂ ಮೀನುಗಾರಿಕಾ ಬಂದರುಗಳ ಯೋಜನೆ, ಕರಾವಳಿ ಪ್ರವಾಸೋದ್ಯಮ ಇತ್ಯಾದಿ ಕಾಮಗಾರಿಗಳ ಕುರಿತು ಒಟ್ಟು ರೂ. 8748.54 ಕೋಟಿ ಮೊತ್ತದ 93 ಯೋಜನೆಗಳನ್ನು ಅನುಮೋದನೆಗಾಗಿ ಭಾರತ ಸರ್ಕಾರದ ಬಂದರು, ಹಡಗು ಹಾಗೂ ಜಲಸಾರಿಗೆ ಮಂತ್ರಾಲಯದ ಸಾಗರಮಾಲಾ ಕೋಶಕ್ಕೆ ಸಲ್ಲಿಸಲಾಗಿರುತ್ತದೆ. ಈ ಪೈಕಿ, ಈಗಾಗಲೇ ರೂ.1727.11 ಕೋಟಿ ಮೊತ್ತದ 19 ಯೋಜನೆಗಳಿಗೆ ವಿಸ್ತೃತ ಯೋಜನಾ ವರದಿಗಳನ್ನು ತಯಾರಿಸಿ ಸಾಗರಮಾಲಾ ಕೋಶಕ್ಕೆ ಸಲ್ಲಿಸಲಾಗಿರುತ್ತದೆ. ಹಾಗೆಯೇ, ರೂ.452.50 ಕೋಟಿ ಮೊತ್ತದ 8 ಯೋಜನೆಗಳ ವಿಸ್ತೃತ ಯೋಜನಾ ವರದಿಗಳನ್ನು ತಯಾರಿಸಲಾಗುತ್ತಿದೆ. ವಿವರಗಳನ್ನು **ಅನುಬಂಧ - 2 ರಿಂದ 5ರಲ್ಲಿ** ನೀಡಿದೆ.

ಪ್ರತಿ ವರ್ಷದ ನೈಋತ್ಯ ಮುಂಗಾರಿನಲ್ಲಿ ಮತ್ತು ಚಂಡಮಾರುತದ ಸಂದರ್ಭದಲ್ಲಿ ಸಂಭವಿಸುವ ಸಮುದ್ರ ಕೊರೆತವನ್ನು ಪ್ರತಿಬಂಧಿಸಲು ನೂತನ ಮಾದರಿಯ ತಂತ್ರಜ್ಞಾನದ "Duck Foot Column" ಶೈಲಿಯ ಕಾಮಗಾರಿಯನ್ನು ಪ್ರಾಯೋಗಿಕವಾಗಿ 500 ಮೀ. ಉದ್ದಕ್ಕೆ ತೀವ್ರ ಸ್ವರೂಪದ ಸಮುದ್ರ ಕೊರೆತ ಸಂಭವಿಸುವ ಪ್ರದೇಶದಲ್ಲಿ ಅಳವಡಿಸಲು ಕ್ರಮ ಜರುಗಿಸಲಾಗುತ್ತಿದೆ.

**ಕಡತ ಸಂಖ್ಯೆ**: IDD 287 PSP 2021 (E-639445)

(ಎಸ್. ಅಂಗಾರ) 10/12/2021

**ಮೀನುಗಾರಿಕೆ, ಬಂದರು ಮತ್ತು**

**ಒಳನಾಡು ಜಲಸಾರಿಗೆ ಸಚಿವರು**